ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಗುರುವಾರ, ದಿನಾಂಕ : 10 ನೇ ಡಿಸೆಂಬರ್, 2020

ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿ ಸದಸ್ಯರ ನೇಮಕಾತಿ ಮಾನದಂಡ ಕುರಿತು

ಶ್ರೀ ಕೆ. ಹರೀಶ್ ಕುಮಾರ್(ವಿಧಾನಸಭೆಯಿಂದ ಚುನಾಯಿತರಾದವರು) –

54 (405) ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿ ಸದಸ್ಯರಾಗಿ ನಾಮ ನಿರ್ದೇಶನಗೊಳ್ಳಲು ಸರ್ಕಾರಿ ನಿಯಮಾವಳಿಯಲ್ಲಿ ಇರುವ ಮಾನದಂಡಗಳೇನು; (ಸಂಪೂರ್ಣ ವಿವರ ನೀಡುವುದು)

(ಆ) ಪ್ರಸ್ತುತ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿ ಅಧಿಕೃತವಾಗಿ ಕಾರ್ಯನಿರ್ವಹಿಸುತ್ತಿರುವ ಸದಸ್ಯರುಗಳ ವಿವರ ಮತ್ತು ಸದಸ್ಯರಾಗಿ ನೇಮಕಗೊಳ್ಳದಿರುವ ಸದರಿ ಮಂಡಳಿಯ ವ್ಯಾಪ್ತಿಯಲ್ಲಿ ಬರುವ ಕರ್ನಾಟಕ ವಿಧಾನ ಪರಿಷತ್ತು ಶಾಸಕರುಗಳ ವಿವರ ನೀಡುವುದು; ಹಾಗೂ ಈ ಮಂಡಳಿಗೆ ಕಾನೂನು ರೀತಿಯಲ್ಲಿ ಸದಸ್ಯರಾಗಿ ನೇಮಕಗೊಳ್ಳಬೇಕಾದ ಕರ್ನಾಟಕ ವಿಧಾನ ಪರಿಷತ್ ಸದಸ್ಯರನ್ನು ಯಾವಾಗ ಸೇರ್ಪಡೆಗೊಳಿಸಲಾಗುವುದು;

(ಇ) ಈ ಮಂಡಳಿಯಲ್ಲಿನ ಕರ್ತವ್ಯ ಲೋಪವು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರದ ನಿಲುವೇನು? (ಸಂಪೂರ್ಣ ವಿವರ ಒದಗಿಸುವುದು)